ಜನವರಿ 2016

BANNERUGHATTA WILDLIFE CONSERVATION GROUP



* ಆಗಮನ
* ಹಸಿರು ಲೇಸ್ವಿಂಗ್
* ಕಾಡು

ವನ್ಯ ವಿಜ್ಞಾನ ಸ್ಪರ್ಧಾ

* ಬೆಂಕಿ ಕೋಳಿಯ ಶತ್ರುಗಳು
* ಪ್ರಕೃತಿ ಬಿಂಬ


ಲೇಖಕ ವೃಂದ

ಸ್ಮಿತಾ ರಾವ್

ವಿಪಿನ್ ಬಳಿಗ

ಅನಿಕೇತನ

ಚಾರುಮತಿ

ಅಂಕಿತ್ ಚಿಂತಪಲ್ಲಿ

ವಿನ್ಯಾಸ

ಅಶ್ವಥ .ಕೆ.ಎನ್

ಮುಖಪುಟ ಛಾಯಾಚಿತ್ರ

ಹರಿಹರನ್ .ಐ.ಎಸ್

ಪರಿಷ್ಕರಣೆ

ಮುರಳಿ .ಎಸ್



# ಆಗಮನ

ಚಳಿಗಾಲದ ಒಂದು ದಿನ. ಏಳಲು ಮನಸ್ಸಿಲ್ಲದಿದ್ದರೂ ಇನ್ನು ಬೆರಳೆಣಿಕೆಯ ದಿನದಲ್ಲಿ ಪರೀಕ್ಷೆ ಆರಂಭವಾಗುತ್ತಿದ್ದುದರಿಂದ ಅನಿವಾರ್ಯವಾಗಿ ಸ್ವೆಟರ್ ಹೊದ್ದು, ಅಮ್ಮ ಮಾಡಿಕೊಟ್ಟ ಬಿಸಿ ಬಿಸಿ ಕಷಾಯ ಕುಡಿದು, ನಿದ್ದೆ ಕಣ್ಣಲ್ಲೇ ಓದೋಣ ಎಂದು ನಿರ್ಧರಿಸಿದೆ! ಹೀಗೆ ಒಂದು ಕೈಯಲ್ಲಿ ಪುಸ್ತಕವನ್ನೂ, ಇನ್ನೊಂದರಲ್ಲಿ ಯಾವುದಾದರೂ ಹಕ್ಕಿ ಬರಬಹುದು ಅನ್ನೋ ನಿರೀಕ್ಷೆಯಲ್ಲಿ ಕ್ಯಾಮೆರಾವನ್ನು ಹಿಡಿದು, ತೂಕಡಿಸುತ್ತಲೇ ಟೆರೇಸ್ ಹತ್ತಿ ಬಂದೆ.



ಎರಡು ವರ್ಷಗಳ ಹಿಂದೆ ದೊಡ್ಡ ದೊಡ್ಡ ಮರಗಳಿಂದ ಆವೃತವಾಗಿ, ಪುಟ್ಟ ಕಾಡಿನಂತಿದ್ದ ನಮ್ಮ ಮನೆಯ ಹಿಂದಿನ ಜಾಗವು, ತುಂಗಾ ನದಿಗೆ ಹತ್ತಿರವೂ ಇದ್ದುದರಿಂದ ಅಲ್ಲಿಗೆ ಬರುತ್ತಿದ್ದ ಎಷ್ಟೋ ಹಕ್ಕಿಗಳಿಗೆ ಆವಾಸ ಸ್ಥಾನವೂ ಆಗಿತ್ತು. ಆದರೆ ಮನುಷ್ಯನ ದುರಾಸೆಗೆ ಹಿಡಿದ ಕನ್ನಡಿಯಂತೆ, ಎಲ್ಲಾ ಮರಗಳೂ ನೆಲಕಚ್ಚಿ, ಇಂದು ಸ್ಮಶಾನದಂತೆ ತೋರುತ್ತಿದೆ. ಅವುಗಳನ್ನು ಉಳಿಸಿಕೊಳ್ಳಲು ಸಾಧ್ಯವಾಗದೆ, ನನ್ನ ಅಸಹಾಯಕತೆಯನ್ನು ಹೇಳಲು ಪ್ರಯತ್ನಿಸಿದರೂ, ಪಕ್ಷಿಗಳು, ತುಂಡಾಗಿ ಬಿದ್ದಿದ್ದ ಮರಗಳು ನಾನು ಯಾವ ರೀತಿಯಲ್ಲೂ ಕ್ಷಮೆ ಕೋರಲು ಅರ್ಹಳಲ್ಲ ಎಂದು ಹೇಳುವಂತೆ ತೋರುತಿತ್ತು. ಹೀಗೆ ಎರಡು ವರ್ಷ ಕಳೆದಿದ್ದರೂ ಆ ಕಡೆಗೆ ನೋಡಿದಾಗಲೆಲ್ಲಾ ಮನಸ್ಸು ವೇದನೆಗೆ ಜಾರುತಿತ್ತು. ಅದಾದ ನಂತರ ಪಕ್ಷಿಗಳ ಕಲರವವೂ ಕಡಿಮೆಯಾಗಿದ್ದುದರಿಂದ, ಪಕ್ಷಿಗಳನ್ನು ಆಕರ್ಷಿಸಲು ಇಡುತ್ತಿದ್ದ ನೀರು, ಗೋಧಿಯೆಲ್ಲವೂ ಮನುಷ್ಯನ ಆಟಾಟೋಪಕ್ಕೆ ಧಿಕ್ಕಾರ ಮಾಡುತ್ತಿರುವಂತೆ ತೋರುತಿತ್ತು.

ಇವೆಲ್ಲವನ್ನೂ ಮತ್ತೊಮ್ಮೆ ಯೋಚಿಸುತ್ತಿರುವಾಗ ಕೈಯಲ್ಲಿದ್ದ ಪುಸ್ತಕವು ವಾಸ್ತವಕ್ಕೆ ಮನಸ್ಸನ್ನು ಕರೆತಂದಿತು. ಇಬ್ಬನಿಯು ಕವಿದು ಆಗತಾನೇ ಸೂರ್ಯನ ಕಿರಣವು ತನ್ನ ಆಗಮನದ ಸುಳಿವನ್ನು ನೀಡುತ್ತಾ, ಒಂಟಿಯಾಗಿ ಕೊನೆಗೆ ಉಳಿದಿದ್ದ ಜಾಲಿಮರವನ್ನು ಸ್ಪರ್ಶಿಸುತಿತ್ತು. ಮೂಕ ಸಂಭಾಷಣೆಗೆ ಜೊತೆಗಿದ್ದ ಜಾಲಿಮರದತ್ತ ಆಗೊಮ್ಮೆ, ಈಗೊಮ್ಮೆ ಕಣ್ಣು ಹಾಯಿಸಿ ಮತ್ತೆ ಓದನ್ನು ಮುಂದುವರೆಸುತ್ತಿದ್ದೆ.

ಹೀಗೆ ಒಮ್ಮೆ ಸುಮ್ಮನೆ ಕಣ್ಣು ಹಾಯಿಸಿದಾಗ ಮರದ ತೊಗಟೆಯೇ ಏನೋ ಎಂಬಂತೆ ಕಂಡ ಹಕ್ಕಿಯೊಂದು ನನ್ನನ್ನು ನಿದ್ದೆಯಿಂದ ಸಂಪೂರ್ಣ ಬಡಿದೆಬ್ಬಿಸಿತು. ಏನು ಓದುತ್ತಿರುವೆನು ಎಂಬುದೂ ಮರೆತು ಹೋಗಿ, 'ಇಲ್ಲಿಯವರೆಗೂ ನೋಡಿರದ ಇದು ಯಾವ ಹಕ್ಕಿ ಆಗಿರಬಹುದು?' ಎಂಬ ಆಲೋಚನೆಯು ಸುಳಿದಾಡಲು ಪ್ರಾರಂಭಿಸಿತು.

ನೋಡುನೋಡುತ್ತಿದಂತೆಯೇ ಹಾವಿನಂತೆ ನಾಲಿಗೆಯನ್ನೊಮ್ಮೆ ಚಾಚಿ, ಮರದ ಮೇಲೆ ಚಿಕ್ಕ, ಚಿಕ್ಕ ತೂತುಗಳನ್ನು ಮಾಡುವುದಲ್ಲದೆ ಕುತ್ತಿಗೆಯನ್ನೂ ತನಗಿಷ್ಟಬಂದಂತೆ ತಿರುಗಿಸುತ್ತಿತ್ತು.

ಅಲ್ಲೇ ಇದ್ದ ಕ್ಯಾಮೆರಾದಲ್ಲಿ ಅದರ ನಾಲ್ಕು ಫೋಟೋ ತೆಗೆಯುತ್ತಿದ್ದಂತೆ ಮರದ ಇನ್ನೊಂದು ಬದಿಗೆ ಹೋಗುತ್ತಾ, ಜಾಲಿಯ ಮರದ ಎಲೆ- ಮುಳ್ಳುಗಳ ನಡುವೆ ಕಾಣದಂತಾಗಿ, ಮತ್ತೇ ಕೆಲವೇ ಕ್ಷಣಗಳಲ್ಲಿ ಹಾರೇ ಹೋಯಿತು. ಅದೇ ಕೊನೆ ಎಂಬಂತೆ ಅದರ ದರ್ಶನವು ಇನ್ನೆಂದಿಗೂ ಆಗಲಿಲ್ಲ. ಹೀಗೆ ಹಿಂದೆಂದೂ ಕಾಣದ, ನನ್ನ ಬಳಿ ಇದ್ದ ಪುಸ್ತಕದಲ್ಲೆಲ್ಲೂ ಅದರ ಬಗ್ಗೆ ದೊರಕದ, ನನಗೆ ತಿಳಿದವರಲ್ಲೂ ಯಾರಿಗೂ ಅದರ ಹೆಸರು ಗೊತ್ತಾಗದೇ ಇದ್ದುದು ಸಹಜವಾಗಿಯೇ ಆ ಹಕ್ಕಿಯ ಮೇಲಿದ್ದ ಆಸಕ್ತಿ ಹೆಚ್ಚಾಗುವಂತೆ ಮಾಡಿತು.

ಕೆಲವು ದಿನಗಳ ನಂತರ ಹುಡುಕಾಟ ನಡೆಸಿದಾಗ, ಮರಕುಟುಕ ಜಾತಿಗೆ ಸೇರಿದ Eurasian Wryneck ಹಕ್ಕಿಎಂಬುದು ತಿಳಿಯಿತು. ಯೂರೋಪ್ ನ ಸಮಶೀತೋಷ್ಣ ವಲಯದಲ್ಲಿ ಸಂತಾನೋತ್ಪತ್ತಿ ಮಾಡುವ ಈ ಹಕ್ಕಿಗಳು, ಚಳಿಗಾಲದಲ್ಲಿ ದಕ್ಷಿಣ ಏಷ್ಯಾ ಮತ್ತು ಆಫ್ರಿಕಾದೆಡೆಗೆ ವಲಸೆ ಬರುತ್ತದೆ. ತಿಳಿ ಕಂದು ಬಣ್ಣ, ಕಪ್ಪುಬಣ್ಣದ ಪಟ್ಟೆಗಳು ಹೊರ ಕಂದು ಮೇಲ್ಮೈನಲ್ಲಿದ್ದು, ಹರಿತವಾದ ಪುಟ್ಟ ಕೊಕ್ಕನ್ನು ಹೊಂದಿದೆ.

ನೋಡಲು ಇತರ ಮರಕುಟುಕ ಹಕ್ಕಿಗಳಿಗಿಂತ ಭಿನ್ನವಾಗಿ ಕಾಣುವ ಇವು, ಚಿಕ್ಕ ಪುಟ್ಟ ಕೀಟಗಳನ್ನು ಮರದ ತೊಗಟೆಗಳಿಂದ ಹೆಕ್ಕಿ ತೆಗೆದು ತಿನ್ನುತ್ತವೆ. ಕತ್ತನ್ನು 180 ಡಿಗ್ರಿಯವರೆಗೂ ತಿರುಗಿಸಬಲ್ಲ ಸಾಮರ್ಥ್ಯವನ್ನು ಹೊಂದಿದೆ. ತಮಗೆ ತೊಂದರೆ ಬಂದೊದಗಿದೆ ಎಂದು ಅನಿಸಿದಾಗ ಹಾವಿನಂತೆ ನಾಲಿಗೆಯನ್ನು ಹೊರಹಾಕಿ, ತಮ್ಮ ರಕ್ಷಣೆಗೆ ಮುಂದಾಗುತ್ತವೆ. ಯೂರೋಪ್ ನ ಅತಿ ಹೆಚ್ಚು ದೂರ ಕ್ರಮಿಸುವ ಮರಕುಟುಕ ಅನ್ನೋ ಹೆಗ್ಗಳಿಕೆಗೂ ಪಾತ್ರವಾಗಿರುವ ಇವು, ವಲಸೆಯಾಗಿ ಹೆಚ್ಚು ಆಫ್ರಿಕಾ, ಭಾರತದಲ್ಲಿ ಹಿಮಾಲಯದಲ್ಲಿ ಕಾಣಸಿಗಲು ಸಾಧ್ಯ ಎಂದು ಓದಿದಾಗ, ಚಳಿಗಾಲದ ಅತಿಥಿ ನಮ್ಮ ಮನೆಯ ತನಕವೂ ಬಂದಿದ್ದು ನನ್ನಲ್ಲಿ ಸಹಜವಾಗೇ ಖುಷಿಯನ್ನು ದುಪ್ಪಟ್ಟುಗೊಳಿಸಿತ್ತು.



ಒಟ್ಟಿನಲ್ಲಿ ಈ ಆಗಮನವು ಹೆಚ್ಚು ಆಸಕ್ತಿಯನ್ನು ಕೆರಳಿಸಿದ್ದಷ್ಟೇ ಅಲ್ಲದೆ, ಹಕ್ಕಿಗಳ ಸಂಗ್ರಹಕ್ಕೆ ಹೊಸ ಸೇರ್ಪಡೆಯನ್ನೂ ಮಾಡಿತ್ತು. ಈ ಜಾಲಿಮರದ ಜೊತೆ ಉಳಿದ ಎಲ್ಲಾ ಮರಗಳೂ ಇದ್ದಿದ್ದರೆ ಇನ್ನೂ ಎಷ್ಟು ಪಕ್ಷಿಗಳು ಆಗಮಿಸುತ್ತಿದ್ದವು ಎಂಬುದನ್ನು ಊಹಿಸಿ ನಿಟ್ಟುಸಿರು ಬಿಡುವಂತಾಯಿತು.

- ಸ್ಮಿತಾ ರಾವ್
ಶಿವಮೊಗ್ಗ



# ಹಸಿರು ಲೇಸ್ವಿಂಗ್





ಹಸಿರು ಲೇಸ್ವಿಂಗ್ ಗಳು ಕೀಟಲೋಕದಲ್ಲಿನ ಅತಿ ಸುಂದರ ಹಾಗೂ ಸೂಕ್ಷ್ಮವಾದ ಜೀವಿಗಳು. ಇವುಗಳ ಸೌಂದರ್ಯ ಹಾಗೂ ಸೂಕ್ಷ್ಮತೆ ಇವುಗಳನ್ನು ಹತ್ತಿರದಿಂದ ನೋಡಿದಾಗ ಮಾತ್ರವೇ ಅರಿವಿಗೆ ಬರುತ್ತದೆ. ಬೆಳೆದಿರುವ ಲೇಸ್ವಿಂಗ್ ಗಳ ದೇಹವು ಮೃದುವಾಗಿದ್ದು ಸುಂದರವಾದ ಸೂಕ್ಷ್ಮಚರ್ಮಗಳಿಂದ ಕೂಡಿರುವ ನಾಲ್ಕು ರೆಕ್ಕೆಗಳನ್ನು, ಚಿನ್ನದಂತೆ ಹೊಳೆಯುವ ಕಣ್ಣುಗಳನ್ನು, ಹಸಿರು ದೇಹವನ್ನು ಹಾಗೂ ಉದ್ದನೆಯ ಆಂಟೇನಾಗಳನ್ನೊಳಗೊಂಡಿದೆ. ಇವುಗಳು ಸಾಮಾನ್ಯವಾಗಿ ಹೊಲಗಳಲ್ಲಿ, ತೋಟಗಳಲ್ಲೂ ಕಾಣಸಿಗುತ್ತವೆ.

ಇವುಗಳಲ್ಲಿನ ಹಲವಾರು ಪ್ರಭೇದಗಳು ಹೂವಿನ ಮಕರಂದ, ಪರಾಗವನ್ನು ಹೀರಿ ಬದುಕುತ್ತವಾದರೂ ಕೆಲವು ಪ್ರಭೇದಗಳು ಅವುಗಳಿಗಿಂತ ಚಿಕ್ಕದಾಗಿರುವ ಮೃದುವಾದ ದೇಹವೊಂದಿರುವ ಎಫಿಡ್ಸ್ ಗಳನ್ನು ಅವಲಂಬಿಸಿವೆ. ಲೇಸ್ವಿಂಗ್ ಗಳು ಮಕರಂದ ಹೀರುವಾಗ ಅವಕ್ಕೆ ಗೊತ್ತಿಲ್ಲದಂತೆಯೇ ಪರಾಗಸ್ಪರ್ಶಕ್ಕೂ ಉಪಯೋಗಕಾರಿಗಳಾಗಿವೆ. ಇವುಗಳು ಸಾಮಾನ್ಯವಾಗಿ ರಾತ್ರಿ ಹಾರುವುದನ್ನು, ಬೆಳಕಿಗೆ ಆಕರ್ಷಣೆಗೊಳ್ಳುವುದನ್ನು ನಾವು ಕಾಣಬಹುದು. ಹೆಣ್ಣು ಲೇಸ್ವಿಂಗ್ ಗಳು ಮೂರ್ನಾಲ್ಕು ವಾರಗಳ ಅವಧಿಯಲ್ಲಿ ಮುನ್ನೂರಕ್ಕೂ ಹೆಚ್ಚು ಮೊಟ್ಟೆಗಳನ್ನು ಎಲೆಗಳ ಮೇಲೋ, ತೊಗಟೆ, ಕೊಂಬೆಗಳ ಮೇಲೋ ಅಥವಾ ಗೋಡೆಗಳ ಮೇಲೋ ಇಡುತ್ತವೆ. ಚಿತ್ರದಲ್ಲಿ ಕಾಣುವಂತೆ ಕೆಲವು ಲೇಸ್ವಿಂಗ್ ಗಳು ಮೊಟ್ಟೆಯನ್ನು ಕೂದಲಿನಂತಿರುವ ಎಳೆಯಲ್ಲಿ ಗುಂಪುಗುಂಪಾಗಿ ಕೆಲವು ಒಂಟೊಂಟಿಯಾಗಿ ಇಡುತ್ತವೆ.



ಈ ಮೊಟ್ಟೆಗಳು ಕೆಲವು ದಿನಗಳ ನಂತರ ಒಡೆದು ಅವುಗಳಿಂದ ಮಾಂಡಿಬಲ್ಸ್ ತರಹ ಕಾಣುವ ಬೇಟೆಯಾಡಲು ಸಶಕ್ತ ವಾದ ಆಯುಧಗಳನ್ನೊಳಗೊಂಡಿರುವ ರಾಕ್ಷಸನಂತಿರುವ ಮರಿಗಳು ಹೊರಬರುತ್ತವೆ. ಒಂದು ಮಿಲಿಮೀಟರ್

ಉದ್ದವಿರುವ ಈ ಮರಿಗಳು, ಬೇಟೆಯುದ್ಯಮ ಶುರುಮಾಡುವುದಕ್ಕೆ ಮುಂಚೆ ತಮ್ಮ ಮೃದುದೇಹ ಗಟ್ಟಿಯಾಗುವ ವರೆಗೂ ಕಲ್ಲಿನಂತೆ ತಟಸ್ಥವಾಗಿರುತ್ತವೆ.



ಮೊಟ್ಟೆಯೊಡೆದು ಹೊರಬಂದ ಮರಿಗಳಿಗೆ ಬೇಟೆಯಾಡಿ ತಿನ್ನುವುದೇ ಕೆಲಸ. ಈ ಬಕಾಸುರನಂತಹ ನಡವಳಿಕೆಗೆ ಇವುಗಳು "ಎಫಿಡ್ಸ್ ಲಯನ್ಸ್" ಎಂದು ಹೆಸರುವಾಸಿಯಾಗಿವೆ. ಇವು ರೈತರ ಬೆಳೆಗಳಿಗೆ ಕಾಟಕೊಡುವ ಕೀಟಗಳನ್ನು ರೋಗಾಣು ತಡೆಗಟ್ಟುವಿಕೆಯಲ್ಲೂ ಗಣನೀಯ ಪಾತ್ರವಹಿಸುತ್ತವೆ. ಇವುಗಳ ಎರಡು ಮೂರು ವಾರದ ಜೀವಿತಾವಧಿಯಲ್ಲಿ ಒಂದು ಲೇಸ್ವಿಂಗ್ ಮರಿ ದ್ರಾಕ್ಷಿಯ ಮೇಲಿರುವ ಸರಿಸುಮಾರು ಇನ್ನೂರೈವತ್ತುಕ್ಕೂ ಹೆಚ್ಚು ನಿಂಪ್ಸ್ ಗಳನ್ನೋ, ಮುನ್ನೂರು-ನಾನೂರು ಎಫಿಡ್ಸ್ ಗಳನ್ನೋ ಅಥವಾ ಹತ್ತು ಸಾವಿರ ಸ್ಪೈಡರ್ ಮೇಟ್ ಗಳನ್ನೋ ಗುಳುಂ ಮಾಡುತ್ತವೆ. ಇವುಗಳ ಬೋಜನಪಟ್ಟಿಯಲ್ಲಿ ಇನ್ನೂ ನೂರಕ್ಕೂ ಹೆಚ್ಚು ತರಹದ ಕೀಟಗಳಿವೆ.





ಇವುಗಳ ಮೊಟ್ಟೆಗಳು ಬೆಳೆಗಳಿಗೆ ಅಂಟಿರುವ ರೋಗ ನಿವಾರಣೆಗೂ ಉಪಯುಕ್ತವಾಗಿರುವುದರಿಂದ ಮೊಟ್ಟೆಗಳನ್ನು ಸಣ್ಣ ಡಬ್ಬಿಗಳಲ್ಲೂ, ಜೇನುಗೂಡಿನಂತ ಪೆಟ್ಟಿಯಲ್ಲೂ ಅಥವಾ ಸಣ್ಣ ಕಾರ್ಡ್ ಗಳಲ್ಲೂ ಮಾರಲಾಗುತ್ತದೆ. ಇವುಗಳನ್ನು ಸೋಂಕಿತ ಎಲೆಗಳ ಮೇಲೆ ಎರಚಲಾಗುತ್ತದೆ ಅಥವಾ ತೋಟ, ಹಸಿರುಮನೆಯಲ್ಲಿ ಅವುಗಳಿಗಾಗಿಯೇ

ಗೊತ್ತುಪಡಿಸಿದ ಜಾಗಗಳಲ್ಲಿ ಇಡಲಾಗುತ್ತದೆ. ಕಾಲ ಹಾಗೂ ಬೆಳೆಗಳನುಸಾರವಾಗಿ ಎಕರೆಗೆ ಐದರಿಂದ ಐವತ್ತು ಸಾವಿರ ಲೇಸ್ವಿಂಗ್ ಗಳನ್ನು ಬಿಡಲಾಗುತ್ತದೆ. ಪ್ರಪಂಚದ ಹಲವು ಕಡೆ ಹತ್ತಿ, ದ್ರಾಕ್ಷಿ, ಆರ್ಕಿಡ್ ಮುಂತಾದ ಬೆಳೆಗಳನ್ನು ಕೀಟನಾಶಕ ಬಳಸದೆ ಸುಮಾರು ಮೂವತ್ತು ವರ್ಷಗಳಿಂದ ಲೇಸ್ವಿಂಗ್ ಗಳ ಈ ಜೈವಿಕ ರಕ್ಷಣವಿಧಾನದಿಂದ ರಕ್ಷಿಸುತ್ತಾ ಬಂದಿವೆ.



ಲೇಸ್ವಿಂಗ್ ಲಾರ್ವಗಳು ತಮ್ಮ ಶತ್ರುಗಳಿಂದ ರಕ್ಷಿಸಿಕೊಳ್ಳಲು ಹಲವಾರು ಕೀಟದ ಅವಶೇಷಗಳಿಂದ ಅಲಂಕೃತಗೊಳಿಸಿ ಕೊಳ್ಳುತ್ತವೆ. ಇವುಗಳ ಈ ಪ್ರವೃತ್ತಿಯಿಂದ ಹಲವಾರೂ ಹಕ್ಕಿಗಳು ಹಾಗೂ ದೊಡ್ಡ ಕೀಟಗಳು ಇವನ್ನು ಗುರುತಿಸದಂತಾಗುತ್ತದೆ. ಕೆಲವು ಹುಳುಗಳಂತೂ ವೈರಿಗಳಿಂದ ರಕ್ಷಿಸಿಕೊಳ್ಳಲು ಕೆಟ್ಟವಾಸನೆ ಸೂಸುವ ರಾಸಾಯನಿಕವನ್ನೂ ಹೊರಸೂಸುತ್ತವೆ.

ಹೀಗೆ ಹಲವು ವಾರಗಳ ನಂತರ ಲಾರ್ವಗಳು ಪೂರ್ಣ ಬೆಳೆದು ಗಿಡಕ್ಕೋ ಅಥವಾ ಮರದ ತೊಗಟೆಗಳಿಗೆ ತೆಳುವಾದ ರೇಷ್ಮೆಯಿಂದ ಗೂಡನ್ನು ಕಟ್ಟಿ ಪೊರೆಹುಳುವಾಗಿ ಪರಿವರ್ತನೆ ಹೊಂದುತ್ತವೆ. ಈ ಹಂತದಲ್ಲಿ ರಾಕ್ಷಸನ ರೀತಿ ಇದ್ದ ಹುಳುಗಳು ಸುಂದರ ಲೇಸ್ವಿಂಗ್ ಗಳಾಗಿ ಹೊರ ಬರುತ್ತವೆ. ಈಗ ಇವು ಹಾರಲು ರೆಕ್ಕೆಗಳನ್ನೂ, ಜನನಾಂಗವನ್ನೋ ಬೆಳೆಸಿಕೊಂಡಿರುತ್ತವೆ. ಈ ಹಂತವು ಅಂದರೆ ಪೊರೆಕಳಚುವ ಹಂತವು ಒಂದು ವಾರದವರೆಗೂ ನಡೆಯುತ್ತದೆ. ನಂತರ ಹೊರಬಂದ ಸುಂದರ ಲೇಸ್ವಿಂಗ್ ಗಳು ತಮ್ಮ ತಮ್ಮ ಸಂಗಾತಿಯನ್ನರಸುತ್ತಾ ಗೂಡಿನಿಂದ ಹೊರಬರುತ್ತವೆ. ಈ ಕ್ರಿಯೆ ಪುನರಾವರ್ತನೆಗೊಳ್ಳುತ್ತದೆ.

ಹಸಿರು ಲೇಸ್ವಿಂಗ್ ಲಾರ್ವದ ವೀಡಿಯೋ ತುಣುಕನ್ನು ನೋಡಲು ಲಿಂಕನ್ನು ಕ್ಲಿಕ್ಕಿಸಿ.

[ಹಸಿರು ಲೇಸ್ವಿಂಗ್]

- ವಿಪಿನ್ ಬಳಿಗ

# ಕಾಡು

ಕತ್ತಲು ಕಗ್ಗತಲ ಕಾಡು,
ಹಗಲಿರುಳು ಎನ್ನ ಕಾಡು.

ಜಗನ್ಮಾತೆಯ ಜ್ಯೇಷ್ಟ ಪುತ್ರನೇ,
ಸೃಷ್ಟಿ ಕ್ರಿಯೆಯ ಕ್ಲಿಷ್ಟ ಕರ್ಣನೇ,
ಹಗಲಿರುಳು ಮಾಡುವೆ ನಿನ್ನ ಸ್ಮರಣೆ,
ತೋರಿಪು ನಿನ್ನ ಅಘಾದ ಶಕ್ತಿಯನ್ನೇ.

ನಿನ್ನ ಕೆಡವಲು ಬಂದವರನ್ನು ಬೆದರಿಸು
ನಿನ್ನ ಬೇಡಲು ಬಂದವರನ್ನು ರಕ್ಷಿಸು,
ನಿನ್ನ ವಿಕ್ರಿಯ ಮಾಡಲು ಬಂದವರನ್ನು ,
ನಿನ್ನ ನೋಡಲು ಬಂದವರನ್ನು ರಂಜಿಸು,
ನಿನ್ನ ಒಲವಿಗೆ ಬಂದವರನ್ನು ಮುದ್ದಿ,
ನಿನ್ನ ತಂಟೆಗೆ ಬಂದವರನ್ನು ಕಡೆಗಾಣಿ.

ಕತ್ತಲು ಕಗ್ಗತಲ ಕಾಡು,
ಹಗಲಿರುಳು ಎನ್ನ ಕಾಡು.

ಕೋಟಿ ಜೀವಿಗಳ ಜನನಿ,
ಕಟ್ಟಲೆ ಜನಗಳ ಗುಪ್ತಗಾಮಿನಿ,

ಕವಿಗಳ ಪ್ರಥಮ ಸ್ಫೂರ್ತಿ ನೀ,
ರಸಿಕರ ಅಪ್ರತಿಮ ಪ್ರೇಯಸಿ ನೀ.

ಮನುಗಳ ದೃಷ್ಟಿಯ ಹೊನ್ನಿನ ಸಿರಿ,
ಕಲೆಗಳ ಸೃಷ್ಟಿಯ ನಯನ ಪರಿ,
ಮನುಗಳ ಸ್ವಾರ್ಥಕ್ಕೆ ಬಲಿಯಾಗಬೇಡ,
ಕಲೆಗಳ ನಯನಗಳಿಗೆ ಕೊನೆಯಾಗಬೇಡ.

ಕತ್ತಲು ಕಗ್ಗತಲ ಕಾಡು,
ಹಗಲಿರುಳು ಎನ್ನ ಕಾಡು.

- ಅನಿಕೇತನ

# ವನ್ಯ ವಿಜ್ಞಾನ ಸ್ಪರ್ಧಾ

ಮಕ್ಕಳಿಗಾಗಿ



ಮಕ್ಕಳಿಗಾಗಿಯೇ ವಿಶೇಷವಾಗಿರುವ ಈ ಪುಟದಲ್ಲಿ
ಮಕ್ಕಳ ಬರಹಗಳನ್ನು ಕಳಿಸಬಹುದು.
ಅತ್ಯುತ್ತಮ ಬರಹಗಳಿಗೆ ಬಹುಮಾನ ನೀಡಲಾಗುವುದು.







# ಬೆಂಕಿ ಕೋಳಿಯ ಶತ್ರುಗಳು



ಒಂದು ದಿನ ನಾನು ಬಿಳಿದಾಳಿಗೆ ಹೋಗಿದ್ದೆ. ನಾನು ಒಂದು ಕೋಳಿನ ನೋಡಿದೆ. ಆ ಒಂದು ಕೋಳಿ ಜೊತೆಗೆ ಇನ್ನೊಂದು ಕೋಳಿ ಇತ್ತು. ಅದಕ್ಕೆ ಬೆಂಕಿ ಕೋಳಿ ಅಂತ ಹೆಸರು. ಈ ಬೆಂಕಿ ಕೋಳಿಗಳು ಬೇರೆ ಕೋಳಿಗಿಂತ ಎತ್ತರಕ್ಕೆ, ದಪ್ಪಗೆ ಇರುತ್ತವೆ. ಇದರ ಮೈ ತುಂಬ ಬಿಳಿ ಚುಕ್ಕೆ ಇರುತ್ತದೆ.

ಈ ಕೋಳಿ ಜಾಸ್ತಿ ಮೊಟ್ಟೆ ಇಡುತ್ತೆ. ಆದರೆ ಇದರ ಮೊಟ್ಟೆಗಳು ಉಳಿಯೋದು ತುಂಬ ಕಷ್ಟ. ಹಾವು, ಮುಂಗುಸಿ, ಹದ್ದು, ಹದ್ದು, ಬೆಕ್ಕು, ನಾಯಿಗಳೆಲ್ಲ ಬೆಂಕಿ ಕೋಳಿಯ ಮೊಟ್ಟೆಗಳನ್ನ ತಿನ್ನುತ್ತವೆ. ಬೆಂಕಿ ಕೋಳಿ ಮೊಟ್ಟೆ





ಇದೋ ಜಾಗ ಸುಲಭವಾಗಿ ಕಾಣಲ್ಲ.
ಒಂದು ಸಾರಿ ಕೋಳಿ ಮೊಟ್ಟೆಗಳನ್ನ
ಮುಂಗುಸಿ ತಿಂದುಬಿಟ್ಟಿತು. ಇನ್ನೊಂದು
ಸಾರಿ ಮೊಟ್ಟೆನ ಹಾವು ತಿಂತು. ಆಮೇಲೆ
ಒಂದು ಸಾರಿ ನಮ್ಮ ಊರಿನ ಬೇಟೆಗಾರರೆ
ಕಳ್ಳರತರ ಮೊಟ್ಟೆನ ಕದ್ದರು. ಅವರು
ಸಿಕ್ಕಿದರೆ ಚೆನ್ನಾಗಿ ಜಗಳ ಆಡತೀನಿ. ಈ
ಸತಿ ಕೋಳಿಯ ಹದಿನೈದು ಮರಿಗಳು
ಆಯಿತು. ಆದರೆ ಈ ಸತಿ ಕಟ್ಟಿರುವ
ಹದಿನಾಲ್ಕು ಮರಿ ತಿಂತು. ಇನ್ನೊಂದು
ಮರಿನಾ ಹದ್ದು ಎತ್ತಿಕೊಂಡು ಹೋಯಿ-
ತು. ಆಮೇಲೆ ಅದರ ಮರಿಗೆ ತಿನ್ನಿ-
ಸಿತು. ಬಿಂಕಿ ಕೋಳಿಗೆ ಒಂದು
ಮರಿನೂ ಉಳಿಯಲಿಲ್ಲ.







ಒಂದು ವರ್ಷದಲ್ಲಿ ಬೆಂಕಿ ಕೋಳಿ ಆರು ನೂರು ಮೊಟ್ಟೆ ಇಟ್ಟಿತು. ಆದರೆ ಒಂದೂ ಮರಿ ಆಗಲಿಲ್ಲ. ಬೆಂಕಿ ಕೋಳಿಗೆ ಅಳು ಬರಲಿಲ್ಲ. ಅವು ತೋಟದಲ್ಲಿ ಮೇಯುತ್ತಾಯಿದ್ದವು ನನಗೆ ಅಳು ಬಂತು.




- ಚಾರುಮತಿ

4ನೇ ತರಗತಿ

ಬಿಎನ್ಎಂ ಮಾಂಟೆಸರಿ ಶಾಲೆ

# ಪ್ರಕೃತಿ ಬಿಂಬ




ನೀರೆಂಬ ಅಮೃತಧಾರೆಗೆ ಪರ್ವತಗಳೆ ಮೂಲ. . .!




ನಮಗಾಗಿ ಎಷ್ಟು ಹಣ ಖರ್ಚು ಮಾಡಿದರೆ ಏನು ಪ್ರಯೋಜನ, ನಮ್ಮ ನೆಲೆಯನ್ನು ಉಳಿಸಿ ಸಾಕು. . .!

- ಅಂಕಿತ್ ಚಿಂತಪಲ್ಲಿ